RNI No. **KARBIL/2001/47142**

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೬, ೨೦೧೩ (ಆಶ್ವಯುಜ ೪, ಶಕ ವರ್ಷ ೧೯೩೫)<br>Bangalore, Thursday, September 26, 2013 (Aashwayuja 4, Shaka Varsha 1935) | ಸಂಚಿಕೆ ೩೯<br>Issue 39 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ :** ಕರ್ನಾಟಕ ಪಶುವೈದ್ಯಕೀಯ ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾನಿಲಯ, ಬೀದರ್‌ನ ಡೈರಿ ಬಿ.ಟೆಕ್ (ಡಿ.ಟೆಕ್) ವಿದ್ಯಾರ್ಥಿಗಳ ಇಂಟರ್ನ್‌ಶಿಪ್ ಮಾಸಿಕ ಭತ್ಯೆಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಪಸಂಮೀ/345/ಪಅಸೇ/2011, ದಿನಾಂಕ : 18–01–2012.
2. ಹೈನು ತಾಂತ್ರಿಕ ವಿದ್ಯಾರ್ಥಿಗಳ ಕ್ರಿಯಾ ಸಮಿತಿಯ ಮನವಿ ದಿನಾಂಕ : 09–11–2012.
3. ಕುಲಸಚಿವರು, ಕರ್ನಾಟಕ ಪಶುವೈದ್ಯಕೀಯ ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾನಿಲಯ ರವರ ಪತ್ರ ಸಂಖ್ಯೆ : R/Stipend/1213/2312, ದಿನಾಂಕ : 09–10–2012 ಮತ್ತು ಪತ್ರ ಸಂಖ್ಯೆ : R/Stipend/B.Tech (D.Tech) B.F.Sc/133/2012-13, ದಿನಾಂಕ : 28–12–2012 ಮತ್ತು ಪತ್ರ ಸಂಖ್ಯೆ : R/PS-AHF/UG-Intership/2012-13/5334, ದಿನಾಂಕ : 11–03–2013.

**ಪ್ರಸ್ತಾವನೆ :**

ಹೈನು ತಾಂತ್ರಿಕ ವಿದ್ಯಾರ್ಥಿಗಳ ಕ್ರಿಯಾ ಸಮಿತಿಯು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ಸಂಖ್ಯೆ : ಪಸಂಮೀ 345 ಪಅಸೇ 2011, ದಿನಾಂಕ : 18–01–2012 ರಲ್ಲಿ ಪಶುವೈದ್ಯಕೀಯ ವಿದ್ಯಾರ್ಥಿಗಳಿಗೆ ನೀಡುತ್ತಿರುವಂತೆ ಪ್ರತಿ ಡೈರಿ ಬಿ.ಟೆಕ್ (ಡಿ.ಟೆಕ್) ಮತ್ತು ಬಿ.ಎಫ್.ಎಸ್ಸಿ. ವಿದ್ಯಾರ್ಥಿಗಳಿಗೂ ಮಾಹೆಯಾನ ರೂ. 11,000/– ರಂತೆ ಹಾಗೂ ಪ್ರಯಾಣ ಭತ್ಯೆಯನ್ನು ರೂ. 5,000 ಕ್ಕೆ ಹೆಚ್ಚಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಸರ್ಕಾರಕ್ಕೆ ಮನವಿ ಸಲ್ಲಿಸಿರುತ್ತಾರೆ.

ಕುಲಸಚಿವರು, ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾನಿಲಯ ಇವರು ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರಗಳಲ್ಲಿ ಪ್ರಸ್ತುತ ವಿಶ್ವವಿದ್ಯಾಲಯದಲ್ಲಿ 4 ವರ್ಷ ಅವಧಿಯ ಡೈರಿ ಬಿ.ಟೆಕ್. (ಡಿ.ಟೆಕ್) ಮತ್ತು ಬಿ.ಎಫ್.ಎಸ್ಸಿ (ಮೀನುಗಾರಿಕೆ ಕೋರ್ಸ್) ಸ್ನಾತಕ ಪದವಿ ಕೋರ್ಸ್‌ಗಳಿರುವುದಾಗಿ ತಿಳಿಸಿ, ಭಾರತೀಯ ಪಶುವೈದ್ಯಕೀಯ ಪರಿಷತ್ತು ಹಾಗೂ ಭಾರತೀಯ ಕೃಷಿ ಅನುಸಂಧಾನ ಪರಿಷತ್ತಿನ (ಐಸಿಎಆರ್) ಶೈಕ್ಷಣಿಕ ನಿಯಮಾವಳಿಗಳಂತೆ ನಿಗದಿತ ಪಠ್ಯಕ್ರಮದ ಅನುಸಾರ 7 ಸೆಮಿಸ್ಟರ್‌ಗಳನ್ನು ಪೂರೈಸಿದ ನಂತರ ವಿದ್ಯಾರ್ಥಿಗಳು ಕಡ್ಡಾಯವಾಗಿ ಆರು ತಿಂಗಳ ಅವಧಿಗೆ ಇಂಟರ್ನ್‌ಶಿಪ್ ಮತ್ತು ಇನ್‌ಫ್ಲಾಂಟ್ ತರಬೇತಿಗಳನ್ನು ರಾಜ್ಯದ ವಿವಿಧ ಪಶುವೈದ್ಯಕೀಯ ಆಸ್ಪತ್ರೆಗಳಲ್ಲಿ, ಡೈರಿ ಮತ್ತು ಆಹಾರ ಸಂಸ್ಕರಣಾ ಘಟಕಗಳಲ್ಲಿ ನಿರ್ವಹಿಸಬೇಕಾಗಿದ್ದು, ತರಬೇತಿ ಅವಧಿಯಲ್ಲಿ ವಿದ್ಯಾರ್ಥಿಗಳು ಕಾಲೇಜಿನ ಆವರಣದಿಂದ ಹೊರಗೆ ಉಳಿದು ಊಟ/ವಸತಿ ಸೌಕರ್ಯಗಳನ್ನು ತಾವೇ ಪೂರೈಸಿಕೊಳ್ಳಬೇಕಾಗುವುದೆಂದು ತಿಳಿಸಿರುತ್ತಾರೆ.

ಮುಂದುವರೆದು, ಇಂಟರ್ನ್‌ಶಿಪ್ ತರಬೇತಿಯಲ್ಲಿರುವ ಪ್ರತಿಯೊಬ್ಬ ವಿದ್ಯಾರ್ಥಿ ರಾಜ್ಯ ಸರ್ಕಾರದಿಂದ ರೂ. 500/–ಮಾಸಿಕ ತರಬೇತಿ ಭತ್ಯೆ ಹಾಗೂ ಭಾರತೀಯ ಕೃಷಿ ಅನುಸಂಧಾನ ಪರಿಷತ್ತಿನಿಂದ ರೂ. 250/– ಮಾಸಿಕ ಸಾರಿಗೆ ಭತ್ಯೆ ಪಡೆಯುತ್ತಿದ್ದಾರೆ. ಅವಶ್ಯಕ ವಸ್ತುಗಳ ಬೆಲೆ ಏರಿಕೆ, ಪ್ರಯಾಣ ವೆಚ್ಚ ಅಧಿಕವಾಗಿರುವುದರಿಂದ ಪ್ರಸ್ತುತ ಪಡೆಯುತ್ತಿರುವ ಇಂಟರ್ನ್‌ಶಿಪ್ ಮತ್ತು ಇನ್‌ಫ್ಲಾಂಟ್ ಭತ್ಯೆಗಳನ್ನು ಪರಿಷ್ಕರಿಸುವಂತೆ ಹೈನು ತಾಂತ್ರಿಕ ವಿದ್ಯಾರ್ಥಿಗಳ ಕ್ರಿಯಾ ಸಮಿತಿ, ಬೀದರ್ ಇವರುಗಳು ಕೋರಿರುವುದಾಗಿ ತಿಳಿಸಿ, ಸ್ನಾತಕ ಪದವಿಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಕೃಷಿ ಕುಟುಂಬ ಮತ್ತು ಗ್ರಾಮೀಣ ಹಿನ್ನೆಲೆಯಿಂದ ಬಂದವರಾಗಿದ್ದು ತರಬೇತಿ ಅವಧಿಯಲ್ಲಿ ಆರ್ಥಿಕವಾಗಿ ತೊಂದರೆ ಎದುರಿಸುತ್ತಿದ್ದಾರೆ. ಬಿ.ವಿ.ಎಸ್ಸಿ ಮತ್ತು ಎ.ಹೆಚ್ ಸ್ನಾತಕ ಪದವಿ ಕೋರ್ಸ್ ಹಾಗೂ ಬಿ.ಟೆಕ್ (ಡಿ.ಟೆಕ್) ಮತ್ತು ಬಿ.ಎಫ್.ಎಸ್ಸಿ ಕೋರ್ಸುಗಳು ಒಂದೇ ರೀತಿಯಾಗಿದ್ದು ಬಿ.ವಿ.ಎಸ್ಸಿ ಮತ್ತು ಎ.ಹೆಚ್. ವಿದ್ಯಾರ್ಥಿಗಳಿಗೆ ಈಗಾಗಲೇ

ರೂ. 11,000/–ಗಳ ಇಂಟರ್ನ್‌ಶಿಪ್ ಮಾಸಿಕ ಭತ್ಯೆ ನೀಡುತ್ತಿರುವಂತೆಯೇ ಇಂಟರ್ನ್‌ಶಿಪ್ ಪ್ರೋಗ್ರಾಂ ಡೈರಿ ಬಿ.ಟೆಕ್ (ಡಿ.ಟೆಕ್) ಮತ್ತು ಬಿ.ಎಫ್.ಎಸ್ಸಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೂ ಸಹ ಇಂಟರ್ನ್‌ಶಿಪ್ ಮಾಸಿಕ ಭತ್ಯೆಯನ್ನು ರೂ. 11,000/– ಗಳಿಗೆ ಹೆಚ್ಚಿಸುವಂತೆ ಹಾಗೂ ಈ ವೆಚ್ಚವನ್ನು ಪ್ರತಿ ವರ್ಷ ಹೆಚ್ಚುವರಿ ಅನುದಾನವನ್ನಾಗಿ ಬಿಡುಗಡೆ ಮಾಡುವಂತೆ ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯದ ಕುಲಸಚಿವರು ಸರ್ಕಾರವನ್ನು ಕೋರಿರುತ್ತಾರೆ.

ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾನಿಲಯ ಇವರ ಪ್ರಸ್ತಾವನೆಯನ್ನು ಒದಗಿಸಲಾದ ಎಲ್ಲಾ ಮಾಹಿತಿಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್‌ನ ಡೈರಿ ಬಿ.ಟೆಕ್ (ಡಿ.ಟೆಕ್) ಸ್ನಾತಕ ಪದವಿ ಕೋರ್ಸ್‌ನ ಅಂತಿಮ ವರ್ಷದ ವಿದ್ಯಾರ್ಥಿಗಳಿಗೆ ಪ್ರಸ್ತುತ ನೀಡುತ್ತಿರುವ ಇಂಟರ್ನ್‌ಶಿಪ್ ಮಾಸಿಕ ಭತ್ಯೆಯನ್ನು ಪ್ರತಿ ವಿದ್ಯಾರ್ಥಿಗೆ ರೂ. 11,000/–ಕ್ಕೆ ಹೆಚ್ಚಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಪಸಂಮೀ 326 ಪಅಸೇ 2012, ಬೆಂಗಳೂರು, ದಿನಾಂಕ : 27–04–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು, ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ, ಬೀದರ್‌ನಲ್ಲಿ ವ್ಯಾಸಂಗ ಮಾಡುತ್ತಿರುವ ಡೈರಿ ಬಿ.ಟೆಕ್ (ಡಿ.ಟೆಕ್) ಸ್ನಾತಕ ಪದವಿ ಕೋರ್ಸ್‌ನ ಅಂತಿಮ ವರ್ಷದ ವಿದ್ಯಾರ್ಥಿಗಳಿಗೆ ಪ್ರಸ್ತುತ ನೀಡಲಾಗುತ್ತಿರುವ ಇಂಟರ್ನ್‌ಶಿಪ್ ಮಾಸಿಕ ಭತ್ಯೆಯನ್ನು ಪ್ರತಿ ವಿದ್ಯಾರ್ಥಿಗೆ ರೂ. 11,000/– (ರೂಪಾಯಿ ಹನ್ನೊಂದು ಸಾವಿರ ಮಾತ್ರ) ಕ್ಕೆ ಹೆಚ್ಚಿಸಲು ಮಂಜೂರಾತಿ ನೀಡಲಾಗಿದೆ.

ಸದರಿ ಇಂಟರ್ನ್‌ಶಿಪ್ ಮಾಸಿಕ ಭತ್ಯೆಯ ಹೆಚ್ಚಳದಿಂದ ಉಂಟಾಗುವ ಹೆಚ್ಚುವರಿ ವೆಚ್ಚವನ್ನು ಕರ್ನಾಟಕ ಪಶುವೈದ್ಯಕೀಯ, ಪಶು ಹಾಗೂ ಮೀನುಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ತನ್ನ ಆಂತರಿಕ ಮೂಲದಿಂದ ಹಾಗೂ ಲಭ್ಯವಿರುವ ಅನುದಾನದಿಂದ ಭರಿಸತಕ್ಕದ್ದು. ಈ ಸಂಬಂಧ ಸರ್ಕಾರದಿಂದ ಹೆಚ್ಚುವರಿ ಅನುದಾನ ನೀಡಲಾಗುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಎಫ್‌ಡಿ 498 ವೆಚ್ಚ–4/2012, ದಿನಾಂಕ : 19–04–2013 ರಲ್ಲಿ ನೀಡಲಾದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸರಸಾ**

ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ
(ಪಶುಸಂಗೋಪನೆ).

PR. 822
SC-50

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ 2012–13ನೇ ಸಾಲಿನಲ್ಲಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಯೋಇ 06 ಮಪ್ರಮಂ 2012, ದಿನಾಂಕ : 24–05–2012.
2. ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ಇವರ ಪತ್ರ ಸಂಖ್ಯೆ : ಮಪ್ರಮಂ : ಶಿ : ನಗದು : 2012–13/478, ದಿನಾಂಕ : 03–10–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ 2012–13ನೇ ಸಾಲಿನಲ್ಲಿ ಪ್ರಥಮ ಕಂತಿನ ಅನುದಾನವೆಂದು ರೂ. 850.00 ಲಕ್ಷಗಳನ್ನು ಈ ಕೆಳಕಂಡಂತೆ ಬಿಡುಗಡೆ ಮಾಡಲಾಗಿತ್ತು.

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | ಮೊತ್ತ (ಲಕ್ಷಗಳಲ್ಲಿ) |
|---|---|---|
| 1. | 2515–00–103–0–02–101 (ಸಹಾಯಾನುದಾನ) | 25.00 |
| 2. | 4515–00–800–0–03–132 (ಬಂಡವಾಳ ವೆಚ್ಚ) | 550.00 |
| 3. | 4515–00–800–0–03–422 (ಎಸ್.ಸಿ.ಪಿ.) | 212.50 |
| 4. | 4515–00–800–0–03–423 (ಟಿ.ಎಸ್.ಪಿ) | 62.50 |
| | **ಒಟ್ಟು** | **850.00** |

ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ಇವರು 2012–13ನೇ ಸಾಲಿನ ಎರಡನೇ ಕಂತಿನ ಅನುದಾನವನ್ನು ಬಿಡಗಡೆ ಮಾಡುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗಕ್ಕೆ ರೂ. 50.00 ಲಕ್ಷಗಳನ್ನು ಬಿಡುಗಡೆ ಮಾಡಲು ಉದ್ದೇಶಿಸಿದೆ. ಅಂತೆಯೇ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 06 ಮಪ್ರಮಂ 2012, ಬೆಂಗಳೂರು, ದಿನಾಂಕ : 05–10–2012**

ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗಕ್ಕೆ 2012–13ನೇ ಸಾಲಿನ ಲೆಕ್ಕಶೀರ್ಷಿಕೆ 2515–00–103–0–02–101(ಯೋಜನೆ) ಅಡಿಯಲ್ಲಿ ರೂ. 50.00 ಲಕ್ಷ (ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿದೆ.

ಬಿಡುಗಡೆಯಾದ ಈ ಅನುದಾನವನ್ನು ಮೊದಲು ಮಂಡಳಿಯ ಬ್ಯಾಂಕ್ ಖಾತೆಯಲ್ಲಿ ಇಟ್ಟುಕೊಂಡು ನಂತರ ಅವಶ್ಯಕತೆಗನುಗುಣವಾಗಿ ಖರ್ಚು ಮಾಡುವುದು ಮತ್ತು ಸರ್ಕಾರಕ್ಕೆ ನಿಯಮಾನುಸಾರ ಹಣ ಬಳಕೆ ಪ್ರಮಾಣವನ್ನು ಸರ್ಕಾರಕ್ಕೆ ಸಲ್ಲಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಆಇ 04 ಟಿಎಫ್‌ಪಿ 2012, ದಿನಾಂಕ : 27–04–2012 ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಉಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ–1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

PR. 824

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ** : ಜಿಲ್ಲಾ ಉಸ್ತುವಾರಿ ಸಚಿವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಯೋಇ 44 ಯೋವಿವಿ 2013, ದಿನಾಂಕ : 27–05–2013 ಮತ್ತು 28–05–2013.

2. ಸರ್ಕಾರಿ ಆದೇಶ ಸಂಖ್ಯೆ : ಯೋಇ 44 ಯೋವಿವಿ 2013, ದಿನಾಂಕ : 24–06–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದ 30 ಜಿಲ್ಲೆಗಳಿಗೆ ಜಿಲ್ಲಾ ಉಸ್ತುವಾರಿ ಸಚಿವರನ್ನು ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ : 24–06–2013ರ ಆದೇಶದಲ್ಲಿ ರಾಯಚೂರು ಮತ್ತು ಬೀದರ್ ಜಿಲ್ಲೆಗಳಿಗೆ ಜಿಲ್ಲಾ ಉಸ್ತುವಾರಿ ಸಚಿವರನ್ನು ಮಾರ್ಪಡಿಸಲಾಗಿತ್ತು. ಸದರಿ ಆದೇಶವನ್ನು ಹಿಂತೆಗೆದುಕೊಂಡು ಈ ಕೆಳಗೆ ಸೂಚಿಸಿರುವಂತೆ ಜಿಲ್ಲಾ ಉಸ್ತುವಾರಿ ಸಚಿವರನ್ನು ನೇಮಿಸಲು ಸರ್ಕಾರವು ನಿರ್ಧರಿಸಲಾಗಿದೆ.

| ಕ್ರಮ ಸಂಖ್ಯೆ | ಸಚಿವರ ಹೆಸರು ಮತ್ತು ಈಗಿರುವ ಉಸ್ತುವಾರಿ ಜಿಲ್ಲೆ | ಮಾರ್ಪಡಿಸಿದ ಉಸ್ತುವಾರಿ ಜಿಲ್ಲೆ |
|---|---|---|
| 1. | ಶ್ರೀಮತಿ ಉಮಾಶ್ರೀ ಬೀದರ್ | ರಾಯಚೂರು |
| 2. | ಡಾ॥ ಶರಣಪ್ರಕಾಶ್ ಆರ್. ಪಾಟೀಲ್, ರಾಯಚೂರು | ಬೀದರ್ |

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 44 ಯೋವಿವಿ 2013, ಬೆಂಗಳೂರು, ದಿನಾಂಕ : 08–07–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ದಿನಾಂಕ : 24–06–2013ರ ಆದೇಶವನ್ನು ಹಿಂತೆಗೆದುಕೊಂಡು ಈ ಕೆಳಗೆ ಸೂಚಿಸಿರುವಂತೆ ಜಿಲ್ಲಾ ಉಸ್ತುವಾರಿ ಸಚಿವರನ್ನಾಗಿ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

| ಕ್ರಮ ಸಂಖ್ಯೆ | ಸಚಿವರುಗಳ ಹೆಸರು | ಜಿಲ್ಲೆಗಳ ಹೆಸರು |
|---|---|---|
| 1. | ಶ್ರೀಮತಿ ಉಮಾಶ್ರೀ | ರಾಯಚೂರು |
| 2. | ಡಾ॥ ಶರಣಪ್ರಕಾಶ್ ಆರ್. ಪಾಟೀಲ್ | ಬೀದರ್ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಉಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ–1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

PR. 825
SC-100

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ಇಲ್ಲಿಗೆ ಮಂಜೂರಾದ ತಾತ್ಕಾಲಿಕ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಯೋಇ 22 ಮಪ್ರಮಂ/2011, ದಿನಾಂಕ : 13–08–2012.
2. ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ ಇವರ ಪತ್ರ ಸಂಖ್ಯೆ : ಮಪ್ರಮಂ/ಸಿಬ್ಬಂದಿ/ಹು.ಮು/ 2013–14/206, ದಿನಾಂಕ : 10–07–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ ಕೆಲವೊಂದು ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ : 24–08–2012 ರಿಂದ 23–08–2013 ರವರೆಗೆ ಮುಂದುವರಿಸಲಾಗಿತ್ತು.

ಪ್ರಸ್ತುತ ಸದರಿ ಹುದ್ದೆಗಳನ್ನು ದಿನಾಂಕ : 24–08–2013 ರಿಂದ ಮುಂದಿನ ಒಂದು ವರ್ಷ ಅವಧಿಗೆ ಮುಂದುವರಿಸಲು (2)ರ ಪತ್ರದಲ್ಲಿ ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 26 ಮಪ್ರಮಂ 2013 (ಭಾ), ಬೆಂಗಳೂರು, ದಿನಾಂಕ : 13–08–2013.**

ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ಇಲ್ಲಿಗೆ ಈ ಕೆಳಕಂಡ ಎಂಟು ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ : 24–08–2013 ರಿಂದ 23–08–2014 ರವರೆಗೆ (ಒಂದು ವರ್ಷದ ಅವಧಿ) ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲು ಸರ್ಕಾರ ಮಂಜೂರಾತಿ ನೀಡಿದೆ.

| ಕ್ರಮ ಸಂಖ್ಯೆ | ಹುದ್ದೆಗಳ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1. | ಉಪ ನಿರ್ದೇಶಕರು (ಯೋಜನೆ) | 1 |
| 2. | ಪ್ರಥಮ ದರ್ಜೆ ಸಹಾಯಕರು | 2 |
| 3. | ಕಂಪ್ಯೂಟರ್ ಆಪರೇಟರ್ | 1 |
| 4. | ಸಹಾಯಕ ನಿಯಂತ್ರಕರು | 1 |
| 5. | ಶೀಘ್ರಲಿಪಿಗಾರರು | 1 |
| 6. | ಬೆರಳಚ್ಚುಗಾರರು | 1 |
| 7. | 'ಡಿ' ದರ್ಜೆ ನೌಕರರು | 1 |
| | ಒಟ್ಟು | 8 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಎಫ್ 96, ದಿನಾಂಕ : 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಉಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ–1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

**PR. 827**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗಕ್ಕೆ 2012–13ನೇ ಸಾಲಿನಲ್ಲಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಯೋಇ 06 ಮಪ್ರಮಂ 2012, ದಿನಾಂಕ : 24–05–2012 ಹಾಗೂ 05–10–2012.
2. ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ಇವರ ಪತ್ರ ಸಂಖ್ಯೆ : ಮಪ್ರಮಂ/ಶಿ/ನಗದು/ 2012–13/791, ದಿನಾಂಕ : 28–11–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಗೆ 2012–13ನೇ ಸಾಲಿನಲ್ಲಿ ಪ್ರಥಮ ಕಂತಿನ ಅನುದಾನವೆಂದು ರೂ. 850.00 ಲಕ್ಷಗಳನ್ನು ಹಾಗೂ ಲೆಕ್ಕಶೀರ್ಷಿಕೆ 2515–00–103–0–02–101 (ಸಹಾಯಾನುದಾನ) ರೂ. 50.00 ಲಕ್ಷಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿತ್ತು.

ಕ್ರಮಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ಇವರು 2012–13ನೇ ಸಾಲಿನ ಎರಡನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಅಂತೆಯೇ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 06 ಮಪ್ರಮಂ 2012, ಬೆಂಗಳೂರು, ದಿನಾಂಕ : 05–12–2012.**

ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗಕ್ಕೆ 2012–13ನೇ ಸಾಲಿನ ಎರಡನೇ ಕಂತಿನ ಅನುದಾನ ರೂ. 800.00 ಲಕ್ಷ (ಎಂಟು ನೂರು ಲಕ್ಷಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿದೆ.

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1. | 4515–00–800–0–03–132 (ಬಂಡವಾಳ ವೆಚ್ಚ) | 525.00 |
| 2. | 4515–00–800–0–03–422 (ಎಸ್.ಸಿ.ಪಿ) | 212.50 |
| 3. | 4515–00–800–0–03–423 (ಟಿ.ಎಸ್.ಪಿ) | 62.50 |
| | ಒಟ್ಟು | 800.00 |

ಬಿಡುಗಡೆಯಾದ ಈ ಅನುದಾನವನ್ನು ಮೊದಲು ಮಂಡಳಿಯ ಬ್ಯಾಂಕ್ ಖಾತೆಯಲ್ಲಿಟ್ಟುಕೊಂಡು ನಂತರ ಅವಶ್ಯಕತೆಗನುಗುಣವಾಗಿ ಖರ್ಚು ಮಾಡುವುದು ಮತ್ತು ಸರ್ಕಾರಕ್ಕೆ ನಿಯಮಾನುಸಾರ ಹಣ ಬಳಕೆ ಪ್ರಮಾಣಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ : ಆಇ 08 ಟಿಎಫ್‌ಪಿ 2012, ದಿನಾಂಕ : 04–10–2012ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಉಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ–1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

PR. 828

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಜಿಲ್ಲಾ ಉಸ್ತುವಾರಿ ಸಚಿವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ : ಯೋಇ 44 ಯೋವಿವಿ 2013, ದಿನಾಂಕ : 08–07–2013

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 08–07–2013 ರ ಆದೇಶದಲ್ಲಿ ರಾಯಚೂರು ಮತ್ತು ಬೀದರ್ ಜಿಲ್ಲೆಗಳಿಗೆ ಜಿಲ್ಲಾ ಉಸ್ತುವಾರಿ ಸಚಿವರನ್ನು ನೇಮಿಸಲಾಗಿತ್ತು, ಸದರಿ ಆದೇಶವನ್ನು ಹಿಂತೆಗೆದುಕೊಂಡು ಕೆಳಗೆ ನಮೂದಿಸಿರುವಂತೆ ಜಿಲ್ಲಾ ಉಸ್ತುವಾರಿ ಸಚಿವರನ್ನು ನೇಮಿಸಲು ಸರ್ಕಾರವು ನಿರ್ಧರಿಸಿದೆ.

| ಕ್ರಮ ಸಂಖ್ಯೆ | ಸಚಿವರ ಹೆಸರು | ಜಿಲ್ಲೆಗಳ ಹೆಸರು |
|---|---|---|
| 1. | ಶ್ರೀಮತಿ ಉಮಾಶ್ರೀ | ಬೀದರ್ |
| 2. | ಡಾ॥ ಶರಣಪ್ರಕಾಶ್ ಆರ್. ಪಾಟೀಲ್ | ರಾಯಚೂರು |

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 44 ಯೋವಿವಿ 2013, ಬೆಂಗಳೂರು, ದಿನಾಂಕ : 10–07–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ದಿನಾಂಕ : 08–07–2013ರ ಆದೇಶವನ್ನು ಹಿಂತೆಗೆದುಕೊಂಡು ಈ ಕೆಳಗೆ ನಮೂದಿಸಿರುವಂತೆ ಜಿಲ್ಲಾ ಉಸ್ತುವಾರಿ ಸಚಿವರನ್ನಾಗಿ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

| ಕ್ರಮ ಸಂಖ್ಯೆ | ಸಚಿವರಗಳ ಹೆಸರು | ಜಿಲ್ಲೆಗಳ ಹೆಸರು |
|---|---|---|
| 1. | ಶ್ರೀಮತಿ ಉಮಾಶ್ರೀ | ಬೀದರ್ |
| 2. | ಡಾ॥ ಶರಣಪ್ರಕಾಶ್ ಆರ್. ಪಾಟೀಲ್ | ರಾಯಚೂರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಉಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ-1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

**PR. 829**
**SC-100**

## ಇಂಧನ ಸಚಿವಾಲಯ

**ವಿಷಯ :** 2013-14ನೇ ಸಾಲಿನಲ್ಲಿ ಇಂಧನ ಇಲಾಖೆಯ ಯೋಜನಾ ಕಾರ್ಯಕ್ರಮಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ : ಇಎನ್ 2 ಪಿಎಸ್ಆರ್ 2013, ದಿನಾಂಕ : 12-04-2013.

**ಪ್ರಸ್ತಾವನೆ :**

1. ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ 2013-14ನೇ ಸಾಲಿಗೆ ಆಯವ್ಯಯದಲ್ಲಿ ಬಂಡವಾಳ/ಸಾಲ ಒದಗಿಸಲಾದ ಯೋಜನಾ ಕಾರ್ಯಕ್ರಮಗಳನ್ನು 2013-14ನೇ ಸಾಲಿನಲ್ಲಿ ಮುಂದುವರೆಸಲು ಆದೇಶಿಸಲಾಗಿತ್ತು.
2. 2013-14ನೇ ಸಾಲಿನ ಪರಿಷ್ಕೃತ ಆಯವ್ಯಯದಲ್ಲಿ ಈ ಕೆಳಕಂಡ ಯೋಜನಾ ಕಾರ್ಯಕ್ರಮಗಳಿಗೆ 2013-14ನೇ ಸಾಲಿಗೆ ಬಂಡವಾಳ/ಸಾಲ ಒದಗಿಸಲಾಗಿದೆ.

| ಕ್ರಮ ಸಂಖ್ಯೆ | ಯೋಜನಾ ಕಾರ್ಯಕ್ರಮಗಳ ಲೆಕ್ಕಶೀರ್ಷಿಕೆ | ಆಯವ್ಯಯದಲ್ಲಿ ಒದಗಿಸಲಾಗಿರುವ ಮೊಬಲಗು ರೂ. ಕೋಟಿಗಳಲ್ಲಿ |
|---|---|---|
| 1. | Investment in Power Utilities/ ವಿದ್ಯುಚ್ಛಕ್ತಿ ವಲಯದ ಸಂಸ್ಥೆಗಳಲ್ಲಿ ಹೂಡಿಕೆ | 577.40 |
| 2. | Investment in ESCOMs for Niranthara Jyothi Under Special Development Plan<br>ವಿಶೇಷ ಅಭಿವೃದ್ಧಿ ಯೋಜನೆಯಡಿ ನಿರಂತರ ಜ್ಯೋತಿ ಕಾಮಗಾರಿಗಳಿಗಾಗಿ ಎಸ್ಕಾಂಗಳಲ್ಲಿ ಬಂಡವಾಳ ಹೂಡಿಕೆ | 50.00 |
| | Investment in Power Utility Under Special Development Plan<br>ವಿಶೇಷ ಅಭಿವೃದ್ಧಿ ಯೋಜನೆಯಡಿ ವಿದ್ಯುತ್ ಯೋಜನೆಗಳಲ್ಲಿ ಬಂಡವಾಳ ಹೂಡಿಕೆ | 122.60 |
| 3. | Investment in ESCOMs for Niranthara Jyothi Scheme<br>ನಿರಂತರ ಜ್ಯೋತಿ ಕಾಮಗಾರಿಗಳಿಗಾಗಿ ಎಸ್ಕಾಂಗಳಲ್ಲಿ ಬಂಡವಾಳ ಹೂಡಿಕೆ | 50.00 |
| 4. | Bangalore Distribution Automation Upgradation (JBIC) BESCOM-EAP Loans<br>ಬೆಂಗಳೂರು ಹಂಚಿಕೆ ಉನ್ನತೀಕರಣ (ಜೆಬಿಐಸಿ)-ಬೆವಿಕಂ-ಇಎಪಿ | 145.91 |
| 5. | Belaku Yojana/ಬೆಳಕು ಯೋಜನಾ | 10.00 |
| | **ಮೊತ್ತ** | **955.91** |

3. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ವ್ಯಾಪ್ತಿಯಲ್ಲಿ ಕಾರ್ಯಾನುಷ್ಠಾನಗೊಳ್ಳುತ್ತಿರುವ ಬೆಂಗಳೂರು ವಿತರಣಾ ಜಾಲದ ಉನ್ನತೀಕರಣ ಯೋಜನೆಗೆ JICA ಸಂಸ್ಥೆಯು ಸಾಲದ ರೂಪದಲ್ಲಿ ಬಂಡವಾಳ ಒದಗಿಸುತ್ತಿದ್ದು, ಈ ಹಣದ ಬಿಡುಗಡೆಗಾಗಿ ರಾಜ್ಯದ ಆಯವ್ಯಯದಲ್ಲಿ ರೂ. 145.91 ಕೋಟಿಗಳಷ್ಟು ಹಣ ಒದಗಿಸಿದೆ.
4. ಬಂಡವಾಳ ಹೂಡಿಕೆಗಾಗಿ (Investment in Power Utilities) ಆಯವ್ಯಯದಲ್ಲಿ ಒದಗಿಸಿರುವ ರೂ. 577.40 ಕೋಟಿಗಳನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಬಂಡವಾಳ ಕಾಮಗಾರಿಗಳಲ್ಲಿ ಬಂಡವಾಳ ಹೂಡಿಕೆ ಒದಗಿಸುವುದಾಗಿದೆ.
5. 2013-14ರಲ್ಲಿ ಕಾರ್ಯಪ್ರಗತಿಯಲ್ಲಿರುವ ಯೋಜನೆಗಳನ್ನು ಮುಂದುವರೆಸಿ ಕಾರ್ಯಾನುಷ್ಠಾನಗೊಳಿಸಲು ಪ್ರಸ್ತುತ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 2 ಪಿಎಸ್‌ಆರ್ 2013, ಬೆಂಗಳೂರು, ದಿನಾಂಕ : 07–08–2013.**

1. ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸರ್ಕಾರವು 2013–14ನೇ ಸಾಲಿನಲ್ಲಿ ಈ ಕೆಳಕಂಡ ಕಾರ್ಯಾನುಷ್ಠಾನವಾಗುತ್ತಿರುವ ಯೋಜನಾ ಕಾರ್ಯಕ್ರಮಗಳನ್ನು ಮುಂದುವರಿಸಿ ಅನುಷ್ಠಾನಗೊಳಿಸಲು ಅನುಮೋದನೆ ನೀಡಿದೆ.

| ಕ್ರಮ ಸಂಖ್ಯೆ | ಯೋಜನಾ ಕಾರ್ಯಕ್ರಮಗಳ ಲೆಕ್ಕಶೀರ್ಷಿಕೆ | ಆಯವ್ಯಯದಲ್ಲಿ ಒದಗಿಸಲಾಗಿರುವ ಮೊಬಲಗು ರೂ. ಕೋಟಿಗಳಲ್ಲಿ |
|---|---|---|
| 1. | Investment in Power Utility/ ವಿದ್ಯುಚ್ಛಕ್ತಿ ಬಳಕೆಯಲ್ಲಿ ಹೂಡಿಕೆ **4801-01-190-0-09-211 (Plan)** | 577.40 |
| 2. | Investment in ESCOMs for Niranthara Jyothi Under Special Development Plan ವಿಶೇಷ ಅಭಿವೃದ್ಧಿ ಯೋಜನೆಯಡಿ ನಿರಂತರ ಜ್ಯೋತಿ ಕಾಮಗಾರಿಗಳಿಗಾಗಿ ಎಸ್ಕಾಂಗಳಲ್ಲಿ ಬಂಡವಾಳ ಹೂಡಿಕೆ–4801–80–190–0–02–133 | 50.00 |
| | Investment in ESCOMs Under Special Development Plan ವಿಶೇಷ ಅಭಿವೃದ್ಧಿ ಯೋಜನೆಯಡಿ ವಿಸಕಂಗಳ ವಿದ್ಯುತ್ ಯೋಜನೆಗಳಲ್ಲಿ ಬಂಡವಾಳ ಹೂಡಿಕೆ–**4801–01–190–0–09–133 (Plan)** | 122.60 |
| 3. | Investment in ESCOMs for Niranthara Jyothi Scheme Investment ನಿರಂತರ ಜ್ಯೋತಿ ಕಾಮಗಾರಿಗಳಿಗಾಗಿ ಎಸ್ಕಾಂಗಳಲ್ಲಿ ಬಂಡವಾಳ ಹೂಡಿಕೆ 4801–80–190–0–02–211 (Plan) | 50.00 |
| 4. | Investment in ESCOMs for Bangalore Distribution Automation Upgradation (JBIC) BESCOM-EAP Loans ಬೆಂಗಳೂರು ಹಂಚಿಕೆ ಉನ್ನತೀಕರಣ (ಜೆಬಿಐಸಿ)–ಬೆವಿಕಂ–ಇಎಪಿ 6801–00–205–1–80–394 | 145.91 |
| 5. | Belaku Yojana/ಬೆಳಕು ಯೋಜನಾ 2801–80–800–1–05–103 | 10.00 |
| | **ಮೊತ್ತ** | **955.91** |

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–07–1996 ರನ್ವಯ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

**PR. 830**

ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**

1. ಸರ್ಕಾರಿ ಅಧಿಸೂಚನೆ ಸಂಖ್ಯೆ : ಡಿಇ 15 ಪಿಎಸ್‌ಆರ್ 2002, ದಿನಾಂಕ : 31–05–2002.
2. ಸರ್ಕಾರಿ ಆದೇಶ ಸಂಖ್ಯೆ : ಡಿಇ 15 ಪಿಎಸ್‌ಆರ್ 2002, ದಿನಾಂಕ : 19–12–2002.
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2013, ದಿನಾಂಕ : 20–04–2013.
4. ಸರ್ಕಾರಿ ಆದೇಶ ಸಂಖ್ಯೆ : ಇಎನ್ 7 ಪಿಎಸ್‌ಆರ್ 2013, ದಿನಾಂಕ : 10–05–2013 ಮತ್ತು 03–07–2013.

ಪ್ರಸ್ತಾವನೆ :

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ವಿದ್ಯುತ್ ಸರಬರಾಜು ಕಂಪನಿಗಳ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.
2. ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದ ಪ್ರಕಾರ, ಕನಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as you Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.
3. 2013–14ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ. 500.00 ಕೋಟಿಗಳನ್ನು ಒದಸಲಾಗಿದೆ. ಇದರಲ್ಲಿ ರೂ. 166.00 ಕೋಟಿಗಳನ್ನು ಮೇಲಿನ ಉಲ್ಲೇಖ (4)ರಲ್ಲಿ ಬಿಡುಗಡೆ ಮಾಡಲಾಗಿದೆ.
4. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2013–14ನೇ ಸಾಲಿನ ಆಗಸ್ಟ್ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ಅಡಿಯಲ್ಲಿ ರೂ 42.00 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಪ್ರಸ್ತುತ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 7 ಪಿಎಸ್ಆರ್ 2013, ಬೆಂಗಳೂರು, ದಿನಾಂಕ : 07–08–2013.**

1. ಸರ್ಕಾರವು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ 2013–14ನೇ ಸಾಲಿನ ಆಗಸ್ಟ್ ಮಾಹೆಗೆ ಲೆಕ್ಕಶೀರ್ಷಿಕೆ "2801–80–101–1–13–106" ಸಹಾಯಧನ (ಯೋಜನೇತರ) ದ ಅಡಿಯಲ್ಲಿ ರೂ. 42.00 ಕೋಟಿ (ನಲವತ್ತೆರಡು ಕೋಟಿ ರೂ.ಗಳನ್ನು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.
2. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.
3. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗೆ" ಬಿಡುಗಡೆ ಮಾಡಿರುವ ಅನುದಾನದ ಬಳಕೆಯ ಬಗ್ಗೆ ದೃಢೀಕರಣ ಪತ್ರ (Utilisation Certificate) ನ್ನು ಸಲ್ಲಿಸತಕ್ಕದ್ದು.
4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 01 ಟಿಎಫ್‌ಪಿ 2013, ಬೆಂಗಳೂರು, ದಿನಾಂಕ : 20–04–2013ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 831**

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## FINANCE SECRETARIAT

**SUB :** Revision of Pension/Family Pension in respect of Teachers on 1996 UGC/AICTE/ICAR scales of pay who retired/died on or after 1-1-2006 and before 1-4-1012 prior to getting the benefit of 2006 UGC/AICTE/ICAR pay revision-regarding.

**READ :**
1. G.O. No. FD (Spl) 03 PEM 2007 (II) dated : 6-6-2007.
2. G.O. No. FD (Spl) 81 PEM 2012 dated 03-05-2012.

**PREAMBLE :**

The Government had extended the benefit of 2006 UGC/AICTE/ICAR Scales of pay to various categories of Teachers who were covered by the 1996 UGC/AICTE/ICAR scales of pay from 1-1-2006 and in some cases from dates subsequent to 1-1-2006 but before 1-4-2012.

As per the policy of the Government, the Pension of the Teachers on UGC/AICTE/ICAR scales of pay is regulated by the State Government orders.

The question of revision of Pension/Family Pension in respect of Teachers on 1996 UGC/AICTE/ICAR Scales of pay who have retired/died on or after 1-1-2006 but before 1-4-2012 prior to getting the benefit of 2006 UGC/AICTE/ICAR scales of pay has been considered by the Government and the following orders are issued.

**GOVERNMENT ORDER NO. FD (Spl) 218 PEN 2012, BANGALORE, DATED 5TH JUNE, 2013.**

Government are pleased to extend the following benefits to the Teachers on 1996 UGC/AICTE/ICAR Scales of Pay who have retired/died on or after 1-1-2006 and before 1-4-2012 prior to getting the benefit of 2006 UGC/AICTE/ICAR Scales of Pay :-

i) Revised Pensionary benefits contemplated in Government Order No. FD (Spl) 03 PEN 2007 (I) dated : 6-6-2007 and Government Order No. FD (Spl) 03 PEN 2007(II) dated 6-6-2007 excluding para 2. 1(iv) thereof and for regulation of DA on Pension/Family Pension at State rates as follows :-

| | |
|---|---|
| 1-1-2006 | Nil |
| 1-4-2006 | 2.625% |
| 1-7-2006 | 7% |
| 1-1-2007 | 12.25% |
| 1-7-2007 | 17.5% |
| 1-1-2008 | 22.75% |
| 1-7-2008 | 26.75% |
| 1-1-2009 | 32.75% |
| 1-7-2009 | 38% |
| 1-1-2010 | 46% |
| 1-7-2010 | 56.25% |
| 1-1-2011 | 62.5% |
| 1-7-2011 | 69.5% |
| 1-1-2012 | 76.75% |

ii) Revised pensionary benefits contemplated in G.O. No. FD 81 PEN 2012 dated 3-5-2012 w.e.f. 1-4-2012 and for regulation of DA on Pension/Family Pension at State rates as follows :-

| | |
|---|---|
| 1-4-2012 | Nil |
| 1-7-2012 | 4% |
| 1-1-2013 | 9% |

` iii) The Pensioners/Family Pensioners are eligible for the arrears of increase in Pension/Family Pension payable under this Order based on the date of retirement/death of the Government servant.

By Order and in the name of the Governor of Karnataka,

**P.R. 832**

**SC-100**

**SUNDARA RAJA GUPTHA**

Deputy Secretary to Government,

Finance Department (Services-2).

## ಆರ್ಥಿಕ ಸಚಿವಾಲಯ

**ವಿಷಯ :** ಯುಜಿಸಿ/ಐಸಿಎಆರ್/ಎಐಸಿಟಿಇ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ಬೋಧಕ ವರ್ಗದವರಿಗೆ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ತುಟ್ಟಿ ಭತ್ಯೆಯನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ :**

1. ಸ.ಆ. ಸಂಖ್ಯೆ : ಇಡಿ 37 ಯುಎನ್‌ಇ 2009, ದಿನಾಂಕ : 24-12-2009.
2. ಸ.ಆ. ಸಂಖ್ಯೆ : ಎಹೆಚ್‌ಡಿ 64 ಎಯುಎಂ 2009, ದಿನಾಂಕ : 24-03-2010.
3. ಸ.ಆ. ಸಂಖ್ಯೆ : ಲಾ 147 ಎಲ್‌ಎಸಿ 2009, ದಿನಾಂಕ : 24-06-2010.
4. ಸ.ಆ. ಸಂಖ್ಯೆ : ಎಫ್‌ಡಿ 15 ಎಸ್‌ಆರ್‌ಪಿ 2010, ದಿನಾಂಕ : 23-04-2010.
5. ಸ.ಆ. ಸಂಖ್ಯೆ : ಎಫ್‌ಡಿ 17 ಎಸ್‌ಆರ್‌ಪಿ 2010, ದಿನಾಂಕ : 23-04-2010.
6. ಸ.ಆ. ಸಂಖ್ಯೆ : ಎಫ್‌ಡಿ 27 ಎಸ್‌ಆರ್‌ಪಿ 2010, ದಿನಾಂಕ : 14-10-2010.

7. ಸ.ಆ. ಸಂಖ್ಯೆ : ಇಡಿ 96 ಡಿಟಿಇ 2010, ದಿನಾಂಕ : 07–03–2011.
8. ಸ.ಆ. ಸಂಖ್ಯೆ : ಎಫ್‌ಡಿ 22 ಎಸ್‌ಆರ್‌ಪಿ 2011, ದಿನಾಂಕ : 19–04–2011.
9. ಸ.ಆ. ಸಂಖ್ಯೆ : ಎಫ್‌ಡಿ 37 ಎಸ್‌ಆರ್‌ಪಿ 2011, ದಿನಾಂಕ : 20–10–2011.
10. ಸ.ಆ. ಸಂಖ್ಯೆ : ಎಫ್‌ಡಿ 19 ಎಸ್‌ಆರ್‌ಪಿ 2012, ದಿನಾಂಕ : 17–05–2012.
11. ಸ.ಆ. ಸಂಖ್ಯೆ : ಎಫ್‌ಡಿ 26 ಎಸ್‌ಆರ್‌ಪಿ 2012, ದಿನಾಂಕ : 25–10–2012.

**ಸರ್ಕಾರಿ ಆದೇಶ ಸಂಖ್ಯೆ : ಆಇ 10 ಎಸ್‌ಆರ್‌ಪಿ 2013, ಬೆಂಗಳೂರು, ದಿನಾಂಕ : 20ನೇ ಮೇ 2013.**

1. ಸರ್ಕಾರವು ದಿನಾಂಕ : 1ನೇ ಜನವರಿ 2013 ರಿಂದ ಜಾರಿಗೆ ಬರುವಂತೆ 2006ರ ಪರಿಷ್ಕೃತ ಯುಜಿಸಿ/ಐಸಿಎಆರ್/ಎಐಸಿಟಿಇ ವೇತನ ಶ್ರೇಣಿಗಳಲ್ಲಿರುವ ಬೋಧಕ ಸಿಬ್ಬಂದಿಗಳಿಗೆ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ ಶೇ. 72 ರಿಂದ ಶೇ. 80 ಕ್ಕೆ ಹೆಚ್ಚಿಸಿ ಮಂಜೂರು ಮಾಡಿದೆ.

2. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿ ಭತ್ಯೆಯನ್ನು ಮುಂದಿನ ಆದೇಶ ಹೊರಡಿಸುವವರೆಗೆ ನಗದಾಗಿ ಪಾವತಿ ಮಾಡಲಾಗುವುದು.

3. ಈ ಆದೇಶದ ಉದ್ದೇಶಗಳಿಗಾಗಿ ಮೂಲವೇತನ ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ 2006ರ ಪರಿಷ್ಕೃತ ಯುಜಿಸಿ/ಐಸಿಎಆರ್/ಎಐಸಿಟಿಇ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿ ಪಡೆಯುವ ವೇತನ.

4. ಮೂಲವೇತನಕ್ಕೆ ಇನ್ನಾವುದೇ ಉಪಲಬ್ದಗಳನ್ನು ಸೇರಿಸತಕ್ಕದ್ದಲ್ಲ.

5. ತುಟ್ಟಿ ಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

6. ತುಟ್ಟಿ ಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುಂದರ ರಾಜ ಗುಪ್ತ**

ಸರ್ಕಾರದ ಉಪ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–2).

## FINANCE SECRETARIAT

**SUB :** Dearness Allowance to Teaching Staff on UGC/ICAR/AICTE scales of pay and Judicial Officers on NJPC pay scales-Revision of rates

**READ :**

1. G.O. No. ED 37 UNE 2009 dated : 24-12-2009.
2. G.O. No. AHD 64 AUM 2009, dated 24-03-2010.
3. G.O. No. LAW 147 LAC 2009, dated 24-06-2010.
4. G.O. No. FD 15 SRP 2010, dated 23-04-2010.
5. G.O. No. FD 17 SRP 2010, dated 23-04-2010.
6. G.O. No. FD 27 SRP 2010, dated 14-10-2010.
7. G.O. No. ED 96 DTE 2010, dated 07-03-2011.
8. G.O. No. FD 22 SRP 2011, dated 19-04-2011.
9. G.O. No. FD 37 SRP 2011, dated 20-10-2011.
10. G.O. No. FD 19 SRP 2012, dated 17-05-2012.
11. G.O. No. FD 26 SRP 2012, dated 25-10-2011.

**ORDER NO. FD 10 SRP 2013, BANGALORE, DATED 20$^{TH}$ MAY, 2013.**

1. Government are pleased to sanction increase in the rates of Dearness Allowance to Teaching Staff who are on 2006 Revised UGC/ICAR/AICTE scales of pay and Judicial Officers on NJPC pay scales from the existing rate of 72% to 80% of the basic pay with effect from 1$^{st}$ January 2013.

2. The increase in Dearness Allowance admissible under this order is payable in cash until further orders.

3. For the purpose of this order, the term ‘Basic Pay’ means, the pay drawn by a Government employee in the 2006 revised UGC/ICAR/AICTE and NJPC scales of pay applicable to the post held by him.

4. Basic Pay shall not include any other emoluments.

5. The payment on account of Dearness Allowance involving fractions of 50 paise and above shall be rounded off to the next rupee and fractions less than 50 paise shall be ignored.

6. The Dearness Allowance will be shown as a distinct element of remuneration and will not be treated as pay for any purpose.

By Order and in the name of the Governor of Karnataka,
**SUNDARA RAJA GUPTHA**
Deputy Secretary to Government,
Finance Department (Services-2).

**P.R. 833**
**SC-100**

## ಶಿಕ್ಷಣ ಸಚಿವಾಲಯ
## ತಿದ್ದೋಲೆ
### ಸಂಖ್ಯೆ : ಇಡಿ 67 ಟಿಇಸಿ 2013, ಬೆಂಗಳೂರು, ದಿನಾಂಕ : 06-08-2013.

ಸರ್ಕಾರದ ಅಧಿಸೂಚನೆ ಸಂಖ್ಯೆ : ಇಡಿ 67 ಟಿಇಸಿ 2013, ದಿನಾಂಕ : 27ನೇ ಜುಲೈ 2013ರಲ್ಲಿನ **ವಿಷಯ ಹಾಗೂ ಪ್ರಸ್ತಾವನೆಯಲ್ಲಿ** ನಮೂದಿಸಿರುವ **"2013-14ನೇ ಸಾಲಿಗೆ"** ಎಂಬುದರ ಬದಲಾಗಿ **'2012-13ನೇ ಸಾಲಿಗೆ'** ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು ಹಾಗೂ ಆದೇಶದ ಭಾಗದಲ್ಲಿ ಕಂಡಿಕೆ ಕ್ರಮ ಸಂಖ್ಯೆ (IV)ರ ನಂತರ ಈ ಕೆಳಕಂಡ ಅಂಶವನ್ನು ಸೇರ್ಪಡೆಗೊಳಿಸಿಕೊಂಡು ಓದಿಕೊಳ್ಳತಕ್ಕದ್ದು.

"(V) ಪ್ರಸ್ತಾಪಿತ ಲ್ಯಾಟರಲ್ ಎಂಟ್ರಿ ವಿದ್ಯಾರ್ಥಿಗಳ ಪ್ರವೇಶಾತಿ ಪ್ರಕ್ರಿಯೆ ಮುಗಿದ ನಂತರ ಖಾಸಗಿ ಆಡಳಿತ ಮಂಡಳಿಯು ಸಲ್ಲಿಸುವ ವಿದ್ಯಾರ್ಥಿಗಳ ಪಟ್ಟಿಯನ್ನು ಸಂಬಂಧಪಟ್ಟ ವಿದ್ಯಾ ಸಂಸ್ಥೆಗಳಲ್ಲಿ ಕಳೆದ ಸಾಲಿನಲ್ಲಿ ಬಾಕಿ ಉಳಿದ ಸೀಟುಗಳನ್ನು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ ಇವರು ಖಚಿತಪಡಿಸಿಕೊಂಡು ಅನುಮೋದನೆಯೊಂದಿಗೆ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸತಕ್ಕದ್ದು"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ. ನಾಗಭೂಷಣ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ).

**PR. 834**
**SC-100**

## EDUCATION SECRETARIAT

**SUB :** Seat sharing and fee structure for MBA, MCA and M.E/M.Tech courses in Karnataka for the academic year 2013-14.

**READ :**

1. Government Order No. ED 84 TEC 2012, dated 27-09-2012.
2. Letter F No. 27-4/AICTE/CMAT/Aptech/2013-14, dated 22-8-2012 from AICTE
3. Letter No. VTU/PS/2012-13/6023 dated 5-9-2012 from VTU, Belgaum
4. Notification Advt. No. CMAT/10(03)/2012, dated 1-11-2012 by AICTE
5. Letter/fax message No. ED 177 TEC 2012, dated 7-1-2013, dated 4-3-2013, dated 19-3-2013
6. Notification Advt. No. CMAT/93(2)/2013, dated 10-3-2013 by AICTE
7. Letter F. No. 27-6/AICTE/UB/CMAT-Policy/2013-14 dated 20-3-2013.
8. Interim Order of the Hon'ble High Court in W.P. Nos. 20572-592/2013.
9. Approved intake by AICTE for MBA/MCA & ME/M.Tech for 2013-14
10. Notification No. ED 101 TEC 2005, dated 21-5-2005
11. Notification No. ED 105 TEC 2005, dated 25-6-2005
12. Approval Process Handbook of AICTE for 2013-14.

**PREAMBLE :**

In the Government Order read at (1) above, the seat sharing and fee structure for admission to MBA, MCA, M.E. and M.Tech courses in Karnataka for the academic year 2012-13 has been published.

In the letter read at (2) above, All India Council for Technical Education (AICTE) has informed that Common Management Admission Test (CMAT) is the test for admission in MBA programmes in AICTE approved institutions and University Departments of all the States for 2013-14.

In the letter read at (3) above, Visveshwaraya Technological University. Belgaum has sought for the procedure to be followed for admission to MBA programme in the light of the policy decision of AICTE for conducting a national level Common Management Admission Test (CMAT) for admission MBA programmes for 2013-14.

In the Notifications read at Sl. Nos. (4) (6) and (7) above, AICTE has issued advertisements in the newspapers announcing the schedule for conducting CMAT/Additional CMAT for admission for academic year 2013-14 and better of two scores will be used for admission to MBA programme.

In the letters/fax message read at (5) above, Government has informed to all the concerned through Registrars of Universities in Karnataka for the information of MBA aspirants that admissions to MBA course will be based on CMAT ranking.

The Karnataka Private Post Graduate Colleges Association has challenged the conduction of CMAT before the Hon'ble High Court of Karnataka in W.P. Nos. 20572-592/2013 and sought permission to conduct KMAT for the management quota admissions. In its interim order at Sl. No. (8) above, the Hon'ble High Court has granted permission to the petitioner to conduct KMAT through their Association for the purpose of grant of admissions into Petitioner-Institutions as prayed for.

It has been decided to follow CMAT for admissions to MBA course under Government quota of 50% seats to be filled through Karnataka Examinations Authority for the year 2013-14 on merit basis by following reservation policy pending amendment to the Karnataka Selection of Condidates for Admission to Master of Business Administration and Master of Computer. Application Courses Rules, 2005, and the balance 50% of seats to be filled by the Private Managements by conducting KMAT for admission to MBA course as per the interim orders of the Hon'ble High Court.

Admissions to MCA course for 2013-14 will be as per the Notification read at (10) above 50% of the total intake will be filled by KEA based on PGCET by following reservation policy. Further, it has been decided to consider 20% of sanctioned intake for admission to second year MCA course by the students who have completed Bachelor's Degree of minimum 3 years duration in BCA, BSc. (IT/Computer Science) with Mathematics as a course at 10+2 level or at Graduate level as per (AICTE norms read at (12) above. The students should have obtained at least 50% (45% in case of SC/ST category) at the qualifying examination for lateral entry admissions.

The seat allotments to M.E. and M.Tech courses will be made as per the provisions of the Notifications read at (11) above on merit basis by following reservation policy.

Further, it has been decided that the seat sharing and fee structure for the above PG courses will remain as of last year.

Hence, the order.

**GOVERNMENT ORDER NO. ED 177 TEC 2012, BANGALORE, DATED 2ND AUGUST 2013.**

Government are pleased to order that the seat sharing and fee structure for admission to MBA, MCA, M.E. and M.Tech courses in Karnataka for the academic year 2013-14 will be as follows :

1. **Category-A :**
   - (a) 50% of the total intake in MBA in all private unaided institutions shall be filled through online/centralised counseling conducted by Karnataka Examinations Authority (KEA) for 2013-14 on the basis of the ranking obtained in the Common Management Admission Test (CMAT) conducted by AICTE. The balance 50% of seats will be filled by the Private managements on the basis of KMAT conducted by the Karnataka Private Post Graduate Colleges' Association on the basis of merit and subject to academic eligibility as prescribed by the competent authorities or on the basis of CMAT rankings.
   - (b) 50% of the total intake in MCA in all private unaided institutions shall be filled on the basis of merit in the PGCET through centralized/online counseling by the Karnataka Examination Authority by following reservation policy.
   - (c) 20% of sanctioned intake for admission to second year MCA course shall be filled by the students who have completed Bachelor's Degree of minimum 3 years duration in BCA, BSc. (IT/Computer Science) with Mathematics as a course at 10+2 level or at Guaduate level. The students should have obtained at least 50% (45% in case of SC/ST category) at the qualifying examination for lateral entry admissions.
   - (d) The students who seek admissions for the above courses shall be The tuition fee payable will be Rs. 50,000/- p.a. + University fees for the above courses.
2. **Category-A :**
   - (a) 80% of the total intake in ME and M.Tech courses in all private unaided institutions and unaided courses in private aided institutions shall be filled on the basis of merit secured in GATE or PGCET (in the PGCET examination) through centralized counseling by the Karnataka Examination Authority as per the provisions of the Karnataka Selection of Candidates for Admission to Master of Engineering (M.E. and Master of Technology (M.Tech) Courses Rules. 2005. The tution fee payable will be Rs. 60,000/- p.a. + University fees.
   - (b) 20% of the total intake in ME and M.Tech courses in all private unaided institutions and unaided courses private aided institutions shall be filled on the basis of merit secured in GATE or PGCET or rank list prepared after conducting common Entrance Test by Association of Private Educational Institutions in accordance with merit list subject to eligibility as prescribed by the competent authorities/Universities. The institution concerned can admit students who have taken any of these tests. The tuition fee payable will be Rs. 60,000/- p.a. + University fees.
3. The Government of Karnataka has not mandated a centralized counseling process for the private/unaided institutions for the current academic year. The institutions concerned shall ensure that admissions of management quota are made in a fair and transparent manner. The students should be guided properly by the Association about the procedures to be adopted by the colleges and also to decide the option specifically in selecting the tests like K-MAT/GATE/PGCET/MAT/CAT/JMET and XAT or Common Entrance Test conducted by Association of Private Educational Institutions. A monitoring committee shall be constituted by the Government which shall meet as often as required to ensure proper implementation of the norms prescribed in this order.

4. A Grievance Cell shall be setup by the Karnataka Private Post Graduate Colleges' Association in Bangalore to took into the grievances if any received from any candidate/Institution. The Government may choose to intervene if the Association does not act in the bonafide interest of the students.

By Order and in the name of the Governor of Karnataka,

P.R. 835

SC-500

**B. NAGABHUSHAN**

Under Secretary to Government,

Education Department (Technical Education).

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಬಿ. ಸಿದ್ಧಪ್ಪ, ಶಿಕ್ಷಣಾಧಿಕಾರಿ, ಅಕ್ಷರ ದಾಸೋಹ, ಚಿಕ್ಕಬಳ್ಳಾಪುರ ಇವರ ಮೇಲಿನ ಆರೋಪಗಳ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಸರ್ಕಾರದ ಪತ್ರ ಸಂಖ್ಯೆ : ಇಡಿ 85 ಡಿಜಿಎಂ 2010, ದಿನಾಂಕ : 01–03–2011.
2. ಆಪಾದಿತ ಅಧಿಕಾರಿ ಶ್ರೀ ಸಿದ್ಧಪ್ಪ, ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ : 19–04–2011.
3. ಸರ್ಕಾರದ ಆದೇಶ ಸಂಖ್ಯೆ : ಇಡಿ 85 ಡಿಜಿಎಂ 2009, ದಿನಾಂಕ : 17–11–2011.
4. ಶ್ರೀ ಎನ್. ಸುಬ್ಬರಾವ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರ ವಿಚಾರಣಾ ವರದಿ ದಿನಾಂಕ : 29–11–2012.
5. ಸರ್ಕಾರದ ಪತ್ರ ಸಂಖ್ಯೆ : ಇಡಿ 85 ಡಿಜಿಎಂ 2010, ದಿನಾಂಕ : 04–02–2013.
6. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ : ಸಿ2(7) ದೂರು 08/2010–2011, ದಿನಾಂಕ : 28–02–2013.
7. ಶ್ರೀ ಸಿದ್ಧಪ್ಪ, ಕ್ಷೇತ್ರ ಶಿಕ್ಷಣಾಧಿಕಾರಿ, ಜಗಳೂರು ತಾಲ್ಲೂಕು, ದಾವಣಗೆರೆ ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ : 21–01–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರಲ್ಲಿ ದಿನಾಂಕ : 01–03–2011ರ ನೋಟೀಸ್‌ನಲ್ಲಿ ಶ್ರೀ ಸಿದ್ಧಪ್ಪ, ಹಿಂದಿನ ಕ್ಷೇತ್ರ ಶಿಕ್ಷಣಾಧಿಕಾರಿ, ಅಕ್ಷರ ದಾಸೋಹ, ಚಿಕ್ಕಬಳ್ಳಾಪುರ, ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11 ರನ್ವಯ ಅವರ ವಿರುದ್ಧದ ಈ ಕೆಳಕಂಡ ಆಪಾದನೆಗೆ ಸಂಬಂಧಿಸಿದಂತೆ ಪೂರಕವಾದ ಆರೋಪಣಾ ಪಟ್ಟಿಯನ್ನು ಅನುಬಂಧ–1 ರಿಂದ 4 ರಲ್ಲಿ ಲಗತ್ತಿಸಿ ಕಳುಹಿಸಿ ಅವರ ವಿರುದ್ಧ ಮಾಡಲಾದ ಆಪಾದನೆಗಳ ಕುರಿತು ಅವರ ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಕೋರಲಾಗಿತ್ತು.

ಶ್ರೀ ಬಿ. ಸಿದ್ಧಪ್ಪ, ಶಿಕ್ಷಣಾಧಿಕಾರಿ, ಅಕ್ಷರ ದಾಸೋಹ, ಚಿಕ್ಕಬಳ್ಳಾಪುರ, ಈ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಅಧಿಸೂಚನೆ ಸಂಖ್ಯೆ : ಗ್ರಾಅಪ 127 ಪಬವ 2010, ದಿನಾಂಕ : 22–05–2010 ರಲ್ಲಿ ನಿಮ್ಮನ್ನು ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಶಿವಮೊಗ್ಗ, ಇಲ್ಲಿನ ಹುದ್ದೆಗೆ ನೇಮಿಸಿ ಆದೇಶ ಹೊರಡಿಸಿದ್ದು, ಸದರಿ ಆದೇಶದನ್ವಯ ನಿಮ್ಮ ಮಾತೃ ಇಲಾಖೆಯಾದ ಶಿಕ್ಷಣ ಇಲಾಖೆಯ ಕರ್ತವ್ಯದಿಂದ ಬಿಡುಗಡೆ ಹೊಂದಲು ಆದೇಶವನ್ನು ಪಡೆಯದೆ ನಿಯಮಬಾಹಿರವಾಗಿ ವರ್ಗಾವಣೆಗೊಂಡ ಹುದ್ದೆಯಲ್ಲಿ ಕರ್ತವ್ಯಕ್ಕೆ ಹಾಜರಾಗಲು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಚಿಕ್ಕಬಳ್ಳಾಪುರ, ಇವರ ಚಾಲನಾ ಆದೇಶವನ್ನು ಕೋರಿರುತ್ತೀರಿ.

ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ಸದರಿ ಅಧಿಕಾರಿಯು ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವ ಸಂಬಂಧ ಸರ್ಕಾರವು ಮೇಲೆ ಓದಲಾದ ಕ್ರಮಾಂಕ (3)ರ ದಿನಾಂಕ : 09–02–2009ರ ಆದೇಶದಲ್ಲಿ ವಿಚಾರಣಾಧಿಕಾರಿಗಳು ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (4)ರಲ್ಲಿ ಶ್ರೀ ಎನ್. ಸುಬ್ಬರಾವ್, ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಇವರು ಸದರಿ ಆರೋಪದ ಬಗ್ಗೆ ವಿಚಾರಣೆ ನಡೆಸಿ ವಿಚಾರಣಾ ವರದಿಯಲ್ಲಿ ಶಿಸ್ತು ಪ್ರಾಧಿಕಾರ ಆಪಾದಿತರ ಮೇಲೆ ಮಾಡಲಾದ ಆರೋಪ ರುಜುವಾತಾಗಿಲ್ಲವೆಂದು ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (5)ರ ದಿನಾಂಕ : 04–02–2013ರ ಪತ್ರದಲ್ಲಿ ವಿಚಾರಣಾಧಿಕಾರಿಯವರ ವಿಚಾರಣಾ ವರದಿಯನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ಅಭಿಪ್ರಾಯ ವರದಿಯನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (6)ರ ದಿನಾಂಕ : 28–02–2013ರ ರಲ್ಲಿ ಅಪರ ಆಯುಕ್ತರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ವಿಚಾರಣಾ ವರದಿಯು ಒಪ್ಪಿದೆ ಎಂದು ಅಭಿಪ್ರಾಯಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (7)ರ ದಿನಾಂಕ : 21–01–2013 ರಂತೆ ಲಿಖಿತ ಪ್ರತಿ ರಕ್ಷಣಾ ಹೇಳಿಕೆಯನ್ನು ನೀಡಿ, ಅವರ ಮೇಲಿನ ಆರೋಪವನ್ನು ನಿರಾಕರಿಸಿ ವಿಚಾರಣಾ ವರದಿಯಂತೆ ತಮ್ಮ ಮೇಲಿನ ಆರೋಪಗಳನ್ನು ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ.

ವಿಚಾರಣಾಧಿಕಾರಿಯವರು ನೀಡಿರುವ ವಿಚಾರಣಾ ವರದಿ ಹಾಗೂ ಸದರಿ ಅಧಿಕಾರಿಯು ನೀಡಿರುವ ವಿವರಣೆ/ರಕ್ಷಣಾ ಹೇಳಿಕೆಯನ್ನು ಸರ್ಕಾರವು ಪರಿಶೀಲಿಸಿ ಶ್ರೀಯುತರು ನೀಡಿದ ರಕ್ಷಣಾ ಹೇಳಿಕೆಯನ್ನು ಒಪ್ಪಿಕೊಂಡು ಈ ರೀತಿಯ ಘಟನೆಗಳು ಇನ್ನೂ ಮುಂದೆ ಮರುಕಳಿಸದಂತೆ ಎಚ್ಚರಿಕೆ ವಹಿಸುವಂತೆ ಸೂಚನೆ ನೀಡಲು ಸರ್ಕಾರವು ತೀರ್ಮಾನಿಸಿ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 85 ಡಿಜಿಎಂ 2010, ಬೆಂಗಳೂರು, ದಿನಾಂಕ : 06ನೇ ಆಗಸ್ಟ್ 2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಬಿ. ಸಿದ್ದಪ್ಪ, ಶಿಕ್ಷಣಾಧಿಕಾರಿ, ಅಕ್ಷರ ದಾಸೋಹ, ಚಿಕ್ಕಬಳ್ಳಾಪುರ ಹಾಲಿ ಕ್ಷೇತ್ರ ಶಿಕ್ಷಣಾಧಿಕಾರಿ, ಜಗಳೂರು ತಾಲ್ಲೂಕು, ದಾವಣಗೆರೆ ಇವರ ವಿರುದ್ಧದ ಆರೋಪಗಳ ಮೇಲೆ ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಒಪ್ಪಿ ಹಾಗೂ ಸದರಿ ಅಧಿಕಾರಿ ಇವರು ನೀಡಿರುವ ಹೇಳಿಕೆಯನ್ನು ಒಪ್ಪಿಕೊಂಡು ಅವರ ಮೇಲಿನ ಆರೋಪಗಳಿಂದ ದೋಷಮುಕ್ತಗೊಳಿಸಿ ಇನ್ನೂ ಮುಂದೆ ಇಂತಹ ಘಟನೆಗಳು ಮರುಕಳಿಸದಂತೆ **"ಎಚ್ಚರಿಕೆ"** ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**PR. 836**

**SC-25**

**ಎಸ್.ಬಿ. ಪಟಗಾರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಶಿಕ್ಷಣ ಇಲಾಖೆ (ಸಮಿತಿಗಳು).

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ 6 ಹೆಚ್ಚುವರಿ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ ಇವರ ಪತ್ರ ಸಂಖ್ಯೆ : ಮನಪ್ರಾ/ಇಎಸ್‌ಟಿ/46/2000–01, ದಿನಾಂಕ : 10–1–2013 ಮತ್ತು 27–02–2013.

**ಪ್ರಸ್ತಾವನೆ :**

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರದ ಕಾರ್ಯವ್ಯಾಪ್ತಿಯು 306 ಚ.ಕಿ.ಮೀ. ಪ್ರದೇಶಕ್ಕೆ ಒಳಪಟ್ಟಿದ್ದು. ಒಂದು ಮಂಗಳೂರು ಮಹಾನಗರ ಪಾಲಿಕೆ, ಎರಡು ಪುರಸಭೆಗಳು ಹಾಗೂ 22 ಗ್ರಾಮ ಪಂಚಾಯತ್‌ಗಳು ಪ್ರಾಧಿಕಾರದ ವ್ಯಾಪ್ತಿಗೆ ಬರುತ್ತದೆ. ಭೂಸ್ವಾಧೀನತೆ ಬಡಾವಣೆಗಳ ರಚನೆ, ನಿವೇಶನ ಹಂಚಿಕೆ, ಸಭೆ, ಸಿಬ್ಬಂದಿ, ಲೆಕ್ಕ ಪತ್ರ, ಆಡಳಿತ, ಕೋರ್ಟು ವ್ಯವಹಾರಗಳು, ವಿನ್ಯಾಸ ಅನುಮೋದನೆ, ಕಟ್ಟಡ ನಿರ್ಮಾಣಗಳಿಗೆ ತಾಂತ್ರಿಕ ಅನುಮೋದನೆ, ವಲಯ ದೃಢೀಕರಣ ಪತ್ರ ಪ್ರಾಧಿಕಾರದ ಪ್ರಮುಖ ಕೆಲಸಗಳಾಗಿರುತ್ತದೆ. ಮಂಗಳೂರು ಹಳೇ ಬಸ್ಸು ನಿಲ್ದಾಣ ಪ್ರದೇಶದಲ್ಲಿ ವಾಹನ ನಿಲುಗಡೆಯನ್ನು ಒಳಗೊಂಡ ವಾಣಿಜ್ಯ ಸಂಕೀರ್ಣ, ಉರ್ವಾಸ್ಟೋರ್ ಮತ್ತು ಉರ್ವಾ ಮಾರ್ಕೆಟ್ ಪ್ರದೇಶಗಳಲ್ಲಿ ಮಾರುಕಟ್ಟೆ ಸಂಕೀರ್ಣ ನಿರ್ಮಾಣ, ಮಂಗಳಾ ಕಾರ್ನಿಷ್ ರಸ್ತೆ ನಿರ್ಮಾಣ ಯೋಜನೆ ಮುಂತಾದ ಬೃಹತ್ ಯೋಜನೆಗಳನ್ನು ಪ್ರಾಧಿಕಾರದಿಂದ ಕೈಗೆತ್ತಿಕೊಳ್ಳುವ ಪ್ರಸ್ತಾವನೆ ಇದೆ. ಈ ಮಧ್ಯೆ–ಚೇಳ್ಯಾರು ಗ್ರಾಮದಲ್ಲಿ ವಸತಿ ಬಡಾವಣೆ ನಿರ್ಮಾಣ ಯೋಜನೆಗೆ ಉದ್ದೇಶಿಸಲಾಗಿದ್ದು, ಮೇಲಿನ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಸಿಬ್ಬಂದಿಗಳ ಕೊರತೆ ಇರುವುದರಿಂದ ದಿನಾಂಕ : 16–07–2005 ರಂದು ನಡೆದ ಪ್ರಾಧಿಕಾರದ ಸಭೆಯಲ್ಲಿ ಹೆಚ್ಚುವರಿಯಾಗಿ ಈ ಕೆಳಕಂಡ 6 ಹುದ್ದೆಗಳನ್ನು ಸೃಜಿಸಲು ನಿರ್ಣಯಿಸಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ.

1. ಕಛೇರಿ ಕಾರ್ಯದರ್ಶಿ
2. ಜೂನಿಯರ್ ಇಂಜಿನಿಯರ್ (ವಿಶೇಷ ಶ್ರೇಣಿ)
3. ಕಂಪ್ಯೂಟರ್ ಆಪರೇಟರ್/ಡಾಟಾ ಪ್ರೊಸೆಸರ್
4. ವರ್ಕ್ ಇನ್ಸ್‌ಪೆಕ್ಟರ್
5. ಲಿಫ್ಟ್ ಆಪರೇಟರ್
6. ಕಾವಲುಗಾರ

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರವು, ಪ್ರಾಧಿಕಾರದ ಸುಗಮ ನಿರ್ವಹಣೆಗಾಗಿ ಆರು ಹೆಚ್ಚುವರಿ ಹುದ್ದೆಗಳನ್ನು ಸೃಜಿಸಲು ನಗರಾಭಿವೃದ್ಧಿ ಕಾಯ್ದೆ ಸೆಕ್ಷನ್ 51 ರಡಿಯಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತದೆ.

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರವು, ಕೋರಿರುವಂತೆ ಈ ಮೇಲ್ಕಂಡ ಆರು ಹುದ್ದೆಗಳನ್ನು ಸೃಜಿಸಿದರೆ ಅದಕ್ಕೆ ತಗಲುವ ವೆಚ್ಚವನ್ನು ಭರಿಸಲು ಪ್ರಾಧಿಕಾರವು ಶಕ್ತವಾಗಿರುತ್ತದೆ. ಹುದ್ದೆಗಳಿಗೆ ಸಂಬಂಧಿಸಿದ ವೇತನ ಭತ್ಯೆಗಳನ್ನು ಪ್ರಾಧಿಕಾರವೇ ತನ್ನ ಸ್ವಂತ ಮೂಲಗಳಿಂದ ಭರಿಸುತ್ತದೆ. ಆದ್ದರಿಂದ, ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರದ ಪ್ರಸ್ತಾವನೆಯನ್ನು ಪರಿಗಣಿಸಿ ಈ ಮೇಲ್ಕಂಡ 6 ಹುದ್ದೆಗಳನ್ನು ಸೃಜಿಸಲು ಸರ್ಕಾರದ ಅನುಮತಿ ನೀಡಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 94 ಮೈಅಪ್ರಾ 2013, ಬೆಂಗಳೂರು, ದಿನಾಂಕ : 08–08–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ಈ ಕೆಳಕಂಡ ಆರು ಹೆಚ್ಚುವರಿ ಹುದ್ದೆಗಳನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

1. ಕಛೇರಿ ಕಾರ್ಯದರ್ಶಿ
2. ಜೂನಿಯರ್ ಇಂಜಿನಿಯರ್ (ವಿಶೇಷ ಶ್ರೇಣಿ)
3. ಕಂಪ್ಯೂಟರ್ ಆಪರೇಟರ್/ಡಾಟಾ ಪ್ರೊಸೆಸರ್
4. ವರ್ಕ್ ಇನ್ಸ್‌ಪೆಕ್ಟರ್
5. ಲಿಫ್ಟ್ ಆಪರೇಟರ್
6. ಕಾವಲುಗಾರ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ. ವಾಸುದೇವರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

PR. 837

SC-100

## ನಗರಾಭಿವೃದ್ಧಿ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ನಅಇ 59 ಗುಅಪ್ರಾ 2010, ಬೆಂಗಳೂರು, ದಿನಾಂಕ : 13-02-2013.**

ಗುಲಬರ್ಗಾ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪ-2)ಕ್ಕೆ ಸಂಬಂಧಿಸಿದಂತೆ ಹೊರಡಿಸಲಾದ ಸರ್ಕಾರದ ತಿದ್ದುಪಡಿ ಸಂಖ್ಯೆ : ನಅಇ 59 ಗುಅಪ್ರಾ 2010, ದಿನಾಂಕ : 09-12-2010ನ್ನು ಹಿಂದಕ್ಕೆ ಪಡೆಯಲಾಗಿದೆ ಹಾಗೂ ಗುಲಬರ್ಗಾ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪ-2)ಕ್ಕೆ ಸರ್ಕಾರದ ಅಂತಿಮ ಅನುಮೋದನೆಯನ್ನು ಸರ್ಕಾರದ ಆದೇಶ ಸಂಖ್ಯೆ : ನಅಇ 59 ಗುಅಪ್ರಾ 2008, ದಿನಾಂಕ : 1-12-2010ರಂದು ಹೊರಡಿಸಲಾಗಿದ್ದು, ಸದರಿ ಆದೇಶದಲ್ಲಿನ ಆದೇಶದ ಭಾಗವನ್ನು ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು.

**ಸರ್ಕಾರದ ಆದೇಶ ಸಂಖ್ಯೆ : ನಅಇ 59 ಗುಅಪ್ರಾ 2010, ಬೆಂಗಳೂರು, ದಿನಾಂಕ : 01-12-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಗುಲಬರ್ಗಾ ನಗರದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ಸಂಬಂಧಿಸಿದಂತೆ, ಈ ಆದೇಶಕ್ಕೆ ಲಗತ್ತಿಸಿರುವ ಮಾದರಿ ವಲಯ ನಿಯಮಾವಳಿಗಳನ್ನು (ಅನುಬಂಧ-1) ಅಳವಡಿಸುವ ಷರತ್ತಿಗೊಳಪಟ್ಟು ಗುಲಬರ್ಗಾ ನಗರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾಯೋಜನೆ (ಪರಿಷ್ಕೃತ-2)ಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3)ರನ್ವಯ ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಅಂತಿಮ ಅನುಮೋದನೆ ನೀಡಲಾಗಿದೆ.

1. ಗುಲಬರ್ಗಾ ನಗರಾಭಿವೃದ್ಧಿ ಪ್ರಾಧಿಕಾರವು ಅನುಬಂಧ-1 ರಲ್ಲಿನ ಮಾದರಿ ವಲಯ ನಿಯಮಾವಳಿಗಳನ್ನು ವರದಿಯಲ್ಲಿ ಸೂಕ್ತವಾಗಿ ಅಳವಡಿಸಿಕೊಂಡು ಸದರಿ ವರದಿಗಳ 3 ಶುದ್ಧ ಪ್ರತಿಗಳನ್ನು ಸರ್ಕಾರಕ್ಕೆ ತಕ್ಷಣ ಸಲ್ಲಿಸಿ ಸರ್ಕಾರದ ಮುದ್ರೆ ಪಡೆದುಕೊಳ್ಳುವುದು.
2. ಸದರಿ ಮಾದರಿ ವಲಯ ನಿಯಮಾವಳಿಗಳನ್ನು ಪ್ರಾಧಿಕಾರವು ತಕ್ಷಣದಿಂದ ಜಾರಿಗೆ ಬರುವಂತೆ ಅನ್ವಯಿಸಿಕೊಳ್ಳತಕ್ಕದ್ದು.

ಮಹಾಯೋಜನೆ (ಪರಿಷ್ಕೃತ-2)ಕ್ಕೆ ಅಂತಿಮ ಅನುಮೋದನೆ ಮೇಲೆ ನೀಡಿದ ಗುರುತಾಗಿ ಮಾದರಿ ವಲಯ ನಿಯಮಾವಳಿಗಳ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ. ವಾಸುದೇವರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

PR. 838

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಸೇರ್ಪಡೆ/ತಿದ್ದುಪಡಿ ಆದೇಶ

**ಸಂಖ್ಯೆ : ಆಕುಕ 219 ಎಂಎಂಸಿ 2013, ಬೆಂಗಳೂರು, ದಿನಾಂಕ : 08-08-2013.**

ಸರ್ಕಾರದ ಆದೇಶ ಸಂಖ್ಯೆ : ಆಕುಕ 98 ಎಂಎಂಇ 95, ದಿನಾಂಕ : 18-04-1995 ರ ಆದೇಶ ಭಾಗದಲ್ಲಿನ ಕಂಡಿಕೆ 03 ರ ಕ್ರಮ ಸಂಖ್ಯೆ viiiರ ನಂತರ "(ix) Director, Nephro Urology Institute, Bangalore-Members (x) Director, SDSTB and Rajivgandhi Institute of Chest Diseases, Bangalore-Member ಹಾಗೂ (xi) Director, Indiragandhi Institute of Child Health, Bangalore-Member" ಎಂಬುದನ್ನು ಸೇರ್ಪಡಿಸಿಕೊಂಡು ಓದಿಕೊಳ್ಳತಕ್ಕದ್ದು.

ಮುಂದುವರಿದು ಕ್ರಮ ಸಂಖ್ಯೆ : "(xi) Eminent Medical person (to be nominated by Government)-Member, (x) Director of Medical Education-Member Secretary ಮತ್ತು (xi) Chief Accounts Officer-cum-F.A. to Director of Medical Education-Treasurer." ಎಂಬುದನ್ನು ಕ್ರಮ ಸಂಖ್ಯೆ "(xii) Eminent Medical Person (to be nominated by Government)-Member, (xiii) Director of Medical Education-Member Secretary ಮತ್ತು (xiv) Chief Accounts Officer-cum-F.A. to Director of Medical Education-Treasurer" ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಬೂಬ್ ಖಾನ್**

ಸರ್ಕಾರದ ಅಧೀನ ಕಾರ್ಯದರ್ಶಿ-2,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

PR. 839

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಆಕುಕ 123 ಆರ್‌ಜಿಯು 2013, ಬೆಂಗಳೂರು, ದಿನಾಂಕ : 16-08-2013.**

ಸರ್ಕಾರದ ಆದೇಶ ಸಂಖ್ಯೆ : ಆಕುಕ 123 ಆರ್‌ಜಿಯು 2013, ದಿನಾಂಕ : 05-06-2013 ರಲ್ಲಿನ ಆದೇಶದ ಭಾಗದಲ್ಲಿ "2013-14 ನೇ ಸಾಲಿಗೆ ರಾಜ್ಯ ಕೋಟಾದಡಿ ಸ್ನಾತಕೋತ್ತರ ಸೀಟುಗಳನ್ನು ಪಡೆದ ವಿದ್ಯಾರ್ಥಿಗಳು ಅಖಿಲ ಭಾರತ ಸ್ನಾತಕೋತ್ತರ ಕೌನ್ಸಿಲಿಂಗ್‌ನಲ್ಲಿ ಭಾಗವಹಿಸುವ ಸಲುವಾಗಿ ದಿನಾಂಕ : 30-06-2013 ರೊಳಗೆ ಸೀಟುಗಳನ್ನು ಆದ್ಯರ್ಪಣೆ ಮಾಡಿದಲ್ಲಿ ಅಂತಹ ವಿದ್ಯಾರ್ಥಿಗಳಿಗೆ ಅವರು ಪಾವತಿಸಬೇಕಾದ ದಂಡವನ್ನು 2013-14ನೇ ಸಾಲಿಗೆ ಅನ್ವಯವಾಗುವಂತೆ ಮಾತ್ರ ಮನ್ನಾ ಮಾಡಿ ಆದೇಶಿಸಿದೆ" ಎಂಬುದನ್ನು "2013-14ನೇ ಸಾಲಿಗೆ ರಾಜ್ಯ ಕೋಟಾದಡಿ ಸ್ನಾತಕೋತ್ತರ ಸೀಟುಗಳನ್ನು ಪಡೆದ ವಿದ್ಯಾರ್ಥಿಗಳು ಅಖಿಲ ಭಾರತ ಸ್ನಾತಕೋತ್ತರ ಕೌನ್ಸಿಲಿಂಗ್ ಅಥವಾ ಇತರೆ ರಾಜ್ಯದ ಕೌನ್ಸಿಲಿಂಗ್‌ನಲ್ಲಿ ಭಾಗವಹಿಸುವ ಸಲುವಾಗಿ ದಿನಾಂಕ : 24-08-2013 ರೊಳಗೆ ಸೀಟುಗಳನ್ನು ಆದ್ಯರ್ಪಣೆ ಮಾಡಿದಲ್ಲಿ ಅಂತಹ ಸೀಟುಗಳನ್ನು ಕರ್ನಾಟಕ ಪಿಜಿಇಟಿ ಯಿಂದ ಭರ್ತಿ ಮಾಡಿಕೊಳ್ಳಲು ಸರ್ವೋಚ್ಚ ನ್ಯಾಯಾಲಯವು ಅವಕಾಶ ನೀಡುವುದನ್ನು ನಿರೀಕ್ಷಿಸಿ, ವಿದ್ಯಾರ್ಥಿಗಳಿಗೆ ಅವರು ಪಾವತಿಸಬೇಕಾದ ದಂಡವನ್ನು 2013-14ನೇ ಸಾಲಿಗೆ ಅನ್ವಯವಾಗುವಂತೆ ಮಾತ್ರ ಮನ್ನಾ ಮಾಡಿ ಆದೇಶಿಸಿದೆ. ಸರ್ವೋಚ್ಚ ನ್ಯಾಯಾಲಯವು ಅನುಮತಿ ನೀಡದ ಪಕ್ಷದಲ್ಲಿ ಸದರಿ ಸೀಟುಗಳು ವ್ಯರ್ಥವಾದಲ್ಲಿ ದಂಡ ಪಾವತಿಸುತ್ತೇವೆಂಬ ಮುಚ್ಚಳಿಕೆಯನ್ನು ವಿದ್ಯಾರ್ಥಿಗಳು ನೀಡತಕ್ಕದ್ದು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಬೂಬ್ ಖಾನ್**

**PR. 840**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ-2, ಬೆಂಗಳೂರು